ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಮಂಗಳವಾರ, ದಿನಾಂಕ : 15 ನೇ ಡಿಸೆಂಬರ್, 2020

ಜಿಲ್ಲಾ ಖನಿಜ ನಿಧಿ ಅನುದಾನದ ಬಗ್ಗೆ

ಶ್ರೀ ಕಾಂತರಾಜ್(ಬಿಎಂಎಲ್)(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) –

677 (855) ಮಾನ್ಯ ಗಣಿ ಮತ್ತು ಭೂವಿಜ್ಞಾನ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ರಾಜ್ಯದಲ್ಲಿ ಜಿಲ್ಲಾ ಖನಿಜ ಪ್ರತಿಷ್ಠಾನ ಟ್ರಸ್ಟ್ (DMFT) ಗಳು ಅಸ್ತಿತ್ವದಲ್ಲಿವೆಯೇ; ಹಾಗಿದ್ದಲ್ಲಿ, ಅವು ಯಾವುವು; ಇವುಗಳ ಸ್ಥಾಪನೆಯ ಉದ್ದೇಶಗಳೇನು; (ವಿವರವಾದ ಮಾಹಿತಿ ನೀಡುವುದು)

(ಆ) ಸದರಿ ಟ್ರಸ್ಟ್‌ಗಳ ಅಡಿ ಹಾಲಿ ಲಭ್ಯವಿರುವ ಅನುದಾನವೆಷ್ಟು; ಸದರಿ ಅನುದಾನವನ್ನು ಯಾವ ಮೂಲದಿಂದ ಶೇಖರಿಸಲಾಗಿದೆ; (ಜಿಲ್ಲಾವಾರು ಮಾಹಿತಿ ನೀಡುವುದು)

(ಇ) ಈ ಅನುದಾನವನ್ನು ಯಾವ ಯಾವ ಕಾರ್ಯಗಳಿಗೆ ವಿನಿಯೋಗಿಸಲಾಗುವುದು; ಇದರ ಸಂಬಂಧ ಹಾಲಿ ಇರುವ ಮಾರ್ಗ ಸೂಚಿಗಳೇನು; ಇಲ್ಲಿಯವರೆಗೆ ಖರ್ಚಾಗದೇ ಉಳಿದಿರುವ ಅನುದಾನವೆಷ್ಟು; (ವಿವರವಾಗಿ ಜಿಲ್ಲಾವಾರು ಸಂಸ್ಥೆಗಳ ಮಾಹಿತಿ ನೀಡುವುದು)

(ಈ) ತುಮಕೂರು, ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಗಳಲ್ಲಿ ಕಳೆದ 3 ವರ್ಷಗಳಿಂದ ಈ ಅನುದಾನದಡಿ ಯಾವ ಯಾವ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ; (ತಾಲ್ಲೂಕುವಾರು ಮಾಹಿತಿ ನೀಡುವುದು)

(ಉ) ಈ ಅನುದಾನವನ್ನು ಹಂಚಿಕೆ ಮಾಡುವ ಸಮಯದಲ್ಲಿ ಸರ್ಕಾರವು ಮಾನ್ಯ ವಿಧಾನ ಸಭಾ ಸದಸ್ಯರಿಗೆ ಮಾತ್ರ ಮನ್ನಣೆ ನೀಡಿ ಮಾನ್ಯ ವಿಧಾನ ಪರಿಷತ್ ಸದಸ್ಯರುಗಳಿಗೆ ಅನುದಾನವನ್ನು ಹಂಚಿಕೆ ಮಾಡಿಲ್ಲದಿರುವುದು ಸರಿಯೇ;

(ಊ) ಈ ತಾರತಮ್ಯವನ್ನು ಸರ್ಕಾರ ಯಾವ ಕಾಲಮಿತಿಯೊಳಗೆ ಸರಿಪಡಿಸಲಿದೆ?